65

ಶ್ರೀ ಮಂಜುನಾಥ ಕೃಪಾಪ್ರೋಷಿತ ನಾಟಕ ಸಭಾ, ಮಂಗಳೂರು.
ಇವರ 21ನೇ ವಾರ್ಷಿಕೋತ್ಸವದ ಸುಸಂದರ್ಭದಲ್ಲಿ
ಅಧ್ಯಕ್ಷತೆ ವಹಿಸಿದ
ಶ್ರೀ॥ ಡಿ. ಪುಟ್ಟಸ್ವಾಮಿ, ಬಿ. ಎ., ಬಿ. ಎಲ್.,
ಇವರಿಗೆ ಅರ್ಪಿಸಿದೆ.

---

ಭಾರತೀಯ ಕುಸುಮಾಂಜಲಿ ೧

# ನಾಟಕ ಕಲೆ

ಲೇಖಕರು:
ಎಮ್. ಸುಬ್ರಾಯನ್.

1953

ಸಂಪಾದಕರು:
ವ್ಯೈ. ಚೆ. ನ. ಶಾಸ್ತ್ರಿ.

ಸಹಾಯಕರು:
ವಿ. ಆರ್. ಪೆರೋಡಿ.

ಭಾರತೀಯ ಕುಸುಮಾಂಜಲಿ ೧

# ನಾಟಕ ಕಲೆ



ಶ್ರೀ ಮಂಜುನಾಥ ಕೃಪಾಪ್ರೋಷಿತ ನಾಟಕ ಸಭಾ, ಮಂಗಳೂರು.
ಇವರ 21ನೇ ವಾರ್ಷಿಕೋತ್ಸವದ ಸುಸಂದರ್ಭದಲ್ಲಿ
ಅಧ್ಯಕ್ಷತೆ ವಹಿಸಿದ
ಶ್ರೀ॥ ಡಿ. ಪುಟ್ಟಸ್ವಾಮಿ, ಬಿ. ಎ., ಬಿ. ಎಲ್.,
ಇವರಿಗೆ ಅರ್ಪಿಸಿದೆ.

1953

ಸಂಪಾದಕರು:
ಮೈ. ಚೆ. ನ. ಶಾಸ್ತ್ರಿ.

ಲೇಖಕರು:
ಎಮ್. ಸುಬ್ರಾಯನ್.

# ನಾಟಕ ಕಲೆ

"ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾ ಪ್ಯೇಕಂ ಸಮಾರಾಧನಂ"

(ಮಾಳವಿಕಾಗ್ನಿ ಮಿತ್ರ — ಕಾಳಿದಾಸ)

ಜನತೆ ಭಿನ್ನರುಚಿ. ಭಿನ್ನರುಚಿಯುಳ್ಳ ಮಾನವನ ಸಂತೋಷ ಸಿದ್ಧಿಯಲ್ಲಿ ಅವನ ಸಮಾರಾಧನೆಗೆ ಇರುವ ವಸ್ತು ನಾಟಕ. ನಾಟಕದಲ್ಲಿ ಹಲವಾರು ಕಲೆಗಳ ಕೂಟವಿದೆ. ರಂಗ ಮಂಚದಲ್ಲಿ ಕಾಣುವ ದೃಶ್ಯ ನಾಟಕ. ಇದೇ ರೂಪಕ. ಉಡಿಗೆ ತೊಡಿಗೆಗಳಿಂದ ಸಿಂಗರಗೊಂಡು ಚೆಲುವಡೆದ ರೂಪು ನಾಟಕದಲ್ಲಿ ಕಾಣುತ್ತಿದೆ. ಅನ್ಯರ ರೂಪಾನುಕರಣೆಯುಂಟಾಗುತ್ತಿದೆ. ಇದರಿಂದಲೇ ರೂಪಕವೆಂಬ ನಾಮಕರಣ ಭರತನಿಂದ ಮಾಡಲಾಗಿದೆ. ರಂಗ ಮಂಚದಲ್ಲಿ ಅಭಿನಯದ ಮೂಲಕ ಈ ಕಲೆಯು ಪ್ರದರ್ಶನವಾಗುವ ವೇಳೆ ನಾವು ಹೊಂದುವ ಕಲೆಗಳ ಭೋಜನವೆಷ್ಟು? ಅದನ್ನು ನಾವು ಗಮನಿಸಿರುವೆವೆ?

ಪರದೆಗಳಲ್ಲಿ ಚಿತ್ರವನ್ನು ಕಾಣುವೆವು. ಬಗೆ ಬಗೆಯ ದೃಶ್ಯಗಳ ಚಿತ್ರವಿರುತ್ತದೆ. ಚಿತ್ರಕಾರನು ಇದನ್ನು ಗಮನಿಸುತ್ತಾನೆ. ಮಕ್ಕಳು ಬಾಯೊಡೆದು ಚಿತ್ರಗಳನ್ನು ನೋಡಬಹುದು, ನಟರು ಅಭಿನಯಿಸುವರು, ಕುಣಿವರು, ನೃತ್ಯದಲ್ಲಿ ಅಭಿರುಚಿಯುಳ್ಳ ಮಂದಿ ಇದನ್ನು ಅಭ್ಯಾಸಗೊಳ್ಳಬಹುದು. ಅಭಿನಯಕಾರರು ಅಭಿನಯಕ್ಕಿರುವ ಜಾಣ್ಮೆಯನ್ನು ಹೊಂದಬಹುದು. ಸಂಗೀತಕಾರರು ಸಂಗೀತದ ಸವಿಯನ್ನು ಹೊಂದಬಹುದು. ಅದರ ಹಿಂದೆ ಹೇಳಬೇಕೆ? ಏನು ಹಿಮ್ಮೇಳ! ಹಿಮ್ಮೇಳ ಕಾಲದಲ್ಲಿ ಎಷ್ಟು ಬಗೆಯ ವಾದನಗಳಿಲ್ಲ. ವೀಣೆ, ಕೊಳಲು, ತಂಬೂರಿ, ಪಿಟೀಲು, ಮೃದಂಗ, ಮುಖವಾದ್ಯಗಳು ಬೇರೆ, ಹಸ್ತವಾದ್ಯಗಳು ಬೇರೆ, ಹತ್ತಾರು ಬಗೆಯ ಹಿಮ್ಮೇಳನ ವಾದ್ಯಗಳು, ಇವುಗಳ ಘೋಷ, ಒಂದೇ ಸವನೆ ತಾಳಲಯ

ಗಳೊಂದಿಗೆ ಕೂಡಿ ಬೆರೆತು, ಕೆಳಗಿಂದ ಮೇಲೇರಿ, ಮೇಲಿಂದ ಕೆಳಗಿಳಿದು
ತಾಳಮಂದ್ರ ಮಂದ್ರತಾರಗಡಿಯಿಂದ ಕೊನೆಗೆ ಬಯಲಲ್ಲಿ ವಿಲೀನವಾಗುವಿಕೆ
ಇವುಗಳನ್ನೆಲ್ಲಾ ಕಾಣಲು ಕೇಳಲು ಉತ್ಸುಕರಾಗದವರಾರು! ಕತೆ ಮಾತ
ಗಾರಿಕೆಗಳು ಇನ್ನೂ ಅಂತೆಯೇ ಬೇರಿವೆ. ಸಾಹಿತ್ಯ ಪ್ರಿಯರಿಗೆ ಅವುಗಳ
ಕತೆಯನ್ನು ತಿಳಿಯುವರು ಕೆಲವರು. ನಟರು ತೊಟ್ಟ ವೇಷ ಭೂಷಣಗಳಿ
ಮರುಳಾಗುವವರು ಕೆಲವರು. ಹೀಗೆ ಹಲವಾರು ಬಗೆಯಿಂದ ನಾಟ
ಹಲವಾರು ಕಲೆಗಳ ಸಮನ್ವಯ. ಈ ಕಲೆಗಳ ಬೆಳಸುವಿಕೆಯೇ ನಮ
ಉದ್ದೇಶವಾಗಿರಬೇಕು.

ಹಲವಾರು ಕಲೆಗಳ ಸಮನ್ವಯ ನಾಟಕವಾದುದರಿಂದಲೆ
"ಕಾವ್ಯೇಷು ನಾಟಕಂ ರಮ್ಯಂ" ಎಂಬೀ ನುಡಿಯುಂಟಾಗಿದೆ. ಕಾ
ರಚನೆಯಂತೆ ನಾಟಕ ರಚನೆಯಲ್ಲ. ದೃಶ್ಯ ಶ್ರವ್ಯಗಳೆಂದು ಎರಡು ಬಗೆಯ
ಕಾವ್ಯಗಳು. ಶ್ರವ್ಯ ಕಾವ್ಯಗಳು ಕತೆ ಕಾದಂಬರಿ ಪುರಾಣಗಳೇ ಮೊದಲ
ದವು. ದೃಶ್ಯ ಕಾವ್ಯನಾಟಕ. ನಾಟಕ ರಚನೆ ಎಲ್ಲರಿಂದಲೂ ಸಾಧ್ಯವಾಗದ್ದು
ಇದು ಪಂಚಮ ವೇದ. ಐದನೆಯ ವೇದವೆಂದು ಭರತನು ಘೋಷಿಸಿ ಹೇ
ದ್ದಾನೆ. ಋಗ್ವೇದದಿಂದ ಶಬ್ದ; ಸಾಮವೇದದಿಂದ ಗೀತ; ಯಜುರ್ವೇ
ದಿಂದ ಅಭಿನಯ; ಅಥರ್ವಣ ವೇದದಿಂದ ರಸ ಸಂಪತ್ತನ್ನು ಪಡೆದು ಸಾವ
ವರ್ಣಿಕವಾದ ಪಂಚಮವೇದ, ನಾಟಕ ಹುಟ್ಟಿದೆಯೆಂದು ಭರತನ ಮತ
ಇದನ್ನಾರೂ ಅಲ್ಲಗಳೆಯುವಂತಿಲ್ಲ.

ಭಾರತೀಯರಲ್ಲಿ ನಾಟಕದ ಹುಟ್ಟು ಇಂದಿನದಲ್ಲ. ಪ್ರಾಚೀನ ಕಾ
ದಿಂದಲೇ ಉಂಟಾಗಿ ಬಳೆದು ಬಂದುದು. ದೇವಾಸುರರು ತಮ್ಮ ತಮ್ಮ ಸು
ಸಂತೋಷಕ್ಕಾಗಿ ನಾಟಕಾಭಿನಯಗೊಳ್ಳುತ್ತಿದ್ದರೆಂದು ಹಿಂದಣ ಗ್ರಂಥಗಳಿಂ
ತಿಳಿದು ಬರುತ್ತದೆ. ನಾಟಕಗಳು ಗ್ರೀಕರಲ್ಲಿ ಬಹಳವಾಗಿವೆಯಾದರೂ ಅವ
ನಾಟಕಗಳಿಗಿಂತ ಭಾರತೀಯರ ನಾಟಕಗಳು ಮೇಲ್ಮಟ್ಟಿದ್ದವು. ಇಂದ
ಪಾಶ್ಚಾತ್ಯರಲ್ಲಿ ಈ ನಾಟಕಗಳು ಹೆಚ್ಚಿವೆಯಾದರೂ ಭರತನಂತೆ ಆ ಬ
ಲಕ್ಷಣವನ್ನು ಹೇಳಿದವರಿಲ್ಲ. ಭರತನೊಬ್ಬ ನಾಟಕ ಲಾಕ್ಷಣಿಕ. ಅವನ
ಸಂಗೀತ ನಾಟ್ಯ ಅದಲ್ಲದೆ ಬಗೆ ಬಗೆಯ ನಾಟಕ ಲಕ್ಷಣಗಳನ್ನು ಬರೆದವನು
ಇವನ ಗ್ರಂಥವನ್ನು ನೋಡಿದಾಗ ಭಾರತೀಯರಲ್ಲಿ ಹತ್ತು ಬಗೆಯ ನಾಟ

ಗಳು ರಸ ಪಾತ್ರಗಳ ಕಲ್ಪನೆಯಿಂದ ಇವೆಯೆಂದು ನಮಗೆ ಮನವರಿಕೆಯಾಗುವುದು. ನಾಟಕ, ಪ್ರಕರಣ, ಬಾಣ, ಪ್ರಹಸನ, ಡಿಮ, ವ್ಯಾಯೋಗ, ಸಮಲಾಕಾರ, ವೀಥಿ, ಅಂಕು, ಈಹಾಮೃಗ ವೆಂಬವೇ ಅವು. ಇವುಗಳಲ್ಲದೆ ನಾಟಿಕೆ, ತ್ರೋಟಿಕ, ಗೋಷ್ಠಿ, ಸಟ್ಟಿಕ, ನಾಟ್ಯರಾಸಕ, ಪ್ರಸ್ಥಾನಕ, ಉಲ್ಲಾಸ್ಯ, ಕಾವ್ಯ, ಪ್ರೇಂಖಣ, ರಾಸಕ, ಸಂಲಾಪಕ, ಶ್ರೀಗದಿತ, ಶಿಲ್ಪಿಕ, ವಿಲಾಸಿಕಾ, ದುರ್ಮಲ್ಲಿಕಾ, ಪ್ರಕರಣಿಕಾ, ಹಲ್ಲೀಶಾ, ಭಾಣಿಕಾ, ಎಂದು ಹದಿನೆಂಟು ಉಪರೂಪಕಗಳಿವೆ. ಇವುಗಳೆಲ್ಲಾ ವಸ್ತು ರಸ ನಾಯಕಭೇದದಿಂದ ಭಿನ್ನ ಭಿನ್ನವಾಗಿವೆ. ರಸ, ನಾಯಕ, ವಸ್ತುಗಳಿಂದಲೇ ಭೇದಕಲ್ಪನೆಯಾಗಿವೆ. ಜಪಾನಿನ ನೋ ನಾಟಕವೇ ಮೊದಲಾದವು ಮೇಲಿನವುಗಳ ಲಕ್ಷಣಗಳನ್ನು ನೋಡಿದರೆ ಅವುಗಳಿಂದ ಭಿನ್ನವಾಗುವುದಿಲ್ಲ. ಭರತನು ನಾಟಕದ ಕುರಿತು ಅದೊಂದು ಮಹಾ ಗ್ರಂಥವನ್ನೇ ನಮಗೆ ಕೊಟ್ಟಿರುವನಾದರೂ ನಾವು ಸಂಸ್ಕೃತವನ್ನು ಮೃತಭಾಷೆಯೆಂದೇ ಹೇಳುತ್ತಿರುವೆವು. ಲೇಟಿನ್ ವಿದೇಶ ಭಾಷೆಗಳಿಗೆ ಕೊಡುವ ಸಹಾಯವನ್ನೇ ಸಂಸ್ಕೃತ ಭಾರತ ಜನಾಂಗದ ಭಾಷೆಗಳಿಗೆ ಕೊಡುತ್ತಿದೆಯಾದರೂ ನಾವು ಅದನ್ನು ಗೌರವಿಸುತ್ತಿಲ್ಲ. ಅದರಲ್ಲೇನಿದೆಯೆಂದು ತಿಳಿಯುತ್ತಿಲ್ಲ. ಕೇವಲ ಅಂಧಾನುಕರಣೆಯನ್ನೇ ಮಾಡುತ್ತಿದ್ದೇವೆ. ವಿದೇಶ ಭಾಷೆ ಮತ್ತು ವಿದೇಶಿಯರಿಂದ ಗುಲಾಮರಾಗಿ ಹಿಂದೆ ಬಾಳಿದೆವು. ಅದೇ ಗುಲಾಮತನಕ್ಕಿರುವ ಅಭಿಲಾಷೆ ಭಾಷಾದೃಷ್ಟಿಯಿಂದ ಇನ್ನೂ ಇದೆ. ಇದು ವಿದೇಶ ಭಾಷೆಯನ್ನು ಕಲಿತು ಅದರ ಅಧಿಕಾರ ಪಡೆದು ವಿದೇಶಿಯರು ಇಲ್ಲಿಂದ ಹೊರಟು ಹೋದರೂ ಅವರ ಅಡಿಯಾಳುಗಳಾಗಿ ಬಾಳಿದ ಮಹನೀಯರ ಅಭಿಪ್ರಾಯ "ಅಂಧೇನೈವನೀಯಮಾನಾಃ ಯಥಾಂಧಾಃ" ಎಂಬ ಉಪನಿಷದ್ವಚನದಂತೆ-ಕುರುಡರಿಂದ ನಡೆಸಲ್ಪಡುವ ನಾವು ಕುರುಡರಾಗಿಯೇ ಪರಿಣಮಿಸಿದ್ದೇವೆ. ಹಿಂದಣ ಗ್ರಂಥಗಳನ್ನು ನೋಡುತ್ತಿಲ್ಲ. ಸಂಸ್ಕೃತದ ಮಾತೆತ್ತಿದರೆ ಪಾಣಿನಿಯ ವ್ಯಾಕರಣ ವಿಚಾರ ಬಂದು ಕಷ್ಟ ಕಷ್ಟ ಎನ್ನುತಿದ್ದೇವೆ. ವಿದೇಶ ಭಾಷೆಗೆ ಉಚ್ಚಾರಣೆ ಅಕ್ಷರಗಳ ನಿಯಮ ಹೇಗೆ ಎಂಬುದನ್ನು ವಿಚಾರಿಸುತ್ತಿಲ್ಲ. ನಾವು ನಮ್ಮ ಹಿರಿಯರನ್ನು ಗೌರವಿಸುತ್ತಿಲ್ಲ. ನಾವು ನಮ್ಮ ಹಿರಿಯರನ್ನೂ ನಾಯಕರನ್ನೂ ಗೌರವಿಸದೆ ದೇಶವನ್ನು ಗೌರವಿಸುವ ಭಾವನೆಯಾದರೂ ಎಲ್ಲಿ!

ಇಂದು ನಾವು ಗುಲಾಮತನದಿಂದ ಬಿಟ್ಟಿದ್ದೇವೆ. ನಮಗೆ ಕೇವ
ರಾಜಕೀಯ ಸ್ವಾತಂತ್ರ್ಯವಾಗಿದೆ. ನಮಗೆ ಆರ್ಥಿಕ ಹಾಗೂ ಜ್ಞಾನ ವಿಜ್ಞಾ
ಸಂಪತ್ತಿನ ಕಳೆಯೇ ಉಂಟಾಗಲಿಲ್ಲ. ಜ್ಞಾನ ವಿಜ್ಞಾನಗಳಿಗಿರುವ ಆಥಿ
ಕಕ್ಕಿರುವ ಗುಲಾಮತನವನ್ನು ನಾವಿಂದು ತೊಡೆದು ಹಾಕಬೇಕಾಗಿದೆ.
ಕಾರ್ಯರಚನೆಯಲ್ಲಿ ನಾಟಕಕ್ಕೆ ಪ್ರಾಮುಖ್ಯವಾದ ನೆಲೆ ಇದೆ. ವಿಜ್ಞಾ
ಶೋಧನೆ ನಡೆಯುತ್ತಿರುವ ನಡೆಯುವ ದೃಶ್ಯಗಳು ಬೇಕಿವೆ. ಕುರುಪತಿ ರ
ರಂಗವನ್ನು ಸಂದರ್ಶಿಸಿದ ದೃಶ್ಯ ರನ್ನನಿಂದ ಅದೊಂದು ನಾಟಕ ರೂಪದಲ್ಲಿ
ಕೊಡಲಾಗಿದೆ. ವಿಜ್ಞಾನ ರಂಗದ ಇಂತಹ ದೃಶ್ಯಗಳು ನಮಗೆ ಮುಖ್
ಅವುಗಳನ್ನು ಮಕ್ಕಳ ಮುಂದೆ ಜನತೆಯ ಮುಂದೆ ಕಾಣಿಸಿದರೆ ಅ
ರಿಂದುಂಟಾಗುವ ಪರಿಣಾಮ ಹಿರಿದು.

ಭಾರತೀಯರು ನಾಟಕಗಳ ಕಡೆಗೆ ಈ ಬಗೆಯ ಹಿತದೃಷ್ಟಿಯಿಂ
ಮುನ್ನುಗ್ಗಬೇಕಿದೆ. ವಿದೇಶ ಭಾಷೆಯನ್ನು ಕಲಿತು ತಂದೆಯನ್ನು ಅದ
ರೆಂದು ಕೇಳಿದಾಗ ಆಂಗ್ಲ ಭಾಷೆಯಲ್ಲಿ ಅದೊಬ್ಬ ನೌಕರನೆಂದು ಹೇಳ
ತ್ತಿರುವ ಮಗನ ದೃಶ್ಯವನ್ನು ನಾವು ಕಾಣುತ್ತಿರುವೆವಾದರೂ ನಮ್ಮ ಮನಸ
ಇನ್ನೂ ಪರಿವರ್ತನೆಗೊಂಡಿಲ್ಲ. ವಿದೇಶದ ಆಫೀಸರರನ್ನು ಗೌರವಿಸುತ್ತಿರ
ವೆವು. ನಮ್ಮ ಅಣ್ಣ ತಮ್ಮಂದಿರಂತಿರುವ ಕೆಲಸಗಾರರನ್ನು ಕಂಡು ಹೀ
ಯಿಸುತ್ತಿರುವೆವು. ಗೇಲಿ ಮಾಡುತ್ತಿರುವೆವು. ಈ ದೃಷ್ಟಿಯೇ ನಾಟಕಗ
ಕಡೆಗೆ ನಮ್ಮಿಂದುಂಟಾಗುತ್ತಿದೆ. ಇಲ್ಲವಾದರೇಕೆ ನಮ್ಮ ನಾಟಕಕಾರರು
ನಮ್ಮ ನಾಟಕ ಕಂಪೆನಿಗಳೂ ಹೇಳ ಹೆಸರಿಲ್ಲದಂತೆ ಅಳಿದು ಹೋಗುತ್ತಿವೆ!

ಇಂದು ನಾಟಕ ಲೇಖಕರೂ ಅಭಿನಯಕಾರರೂ ಗಮನಿಸತಕ್ಕ ಹ
ವಾರು ವಿಚಾರಗಳಿವೆ. ದುಃಖಾಂತ ನಾಟಕಗಳನ್ನು ಓದಿದ ವಿದೇಶೀಯರ
ಆ ಸಾಹಿತ್ಯದ ಪ್ರಭಾವದಿಂದ ಜೀವನದಲ್ಲಿ ದುಃಖಾಂತವನ್ನೇ ಹೊಂದುತ್ತಿರ
ವರು. ಭಾರತೀಯರು ಇದನ್ನು ಚೆನ್ನಾಗಿ ತಿಳಿದಿರುವರು. ಇದರಿಂದಲೆ
ಭಾರತೀಯರಲ್ಲಿ ದುಃಖಾಂತ ನಾಟಗಕಳು ಕಡಮೆಯಾಗಿವೆ. ನಾಟಕಗಳ
ಜನತೆಯನ್ನು ತಿದ್ದಲಿರುವವು. ಲೋಕದಲ್ಲಿ ಸುಖಶಾಂತಿ ಸುಭಿಕ್ಷವನ
ತರಲಿಕ್ಕಿರುವವು. ನಾಟಕಾಂತ್ಯದಲ್ಲಿ ಕಾಣಬರುವ ಭರತವಾಕ್ಯಗಳು ಇ
ರಿಂದಲೇ ಈ ಧರ್ಮತತ್ವವನ್ನು ಸಾರುವವುಗಳಾಗಿ ಕಂಡುಬರುತ್ತಿವೆ. ಕ

ಕುಲಗುರುವಾದ ಕಾಳಿದಾಸನು ಶಾಕುಂತಲದ ಭರತವಾಕ್ಯದಲ್ಲಿ-“ಪ್ರವರ್ತತಾಂ ಪ್ರಕೃತಿಹಿತಾಂಶು ಪಾರ್ಥಿವಃ ಸರಸ್ವತೀ ಶ್ರುತಮಹತೀಂ ಮಹೀಯಸಾಂ” ಎಂದು ಹೇಳಿರುವನು. ದೇಶದ ಒಡೆಯನು ಪ್ರಜಾಹಿತ ವರ್ತನೆಯುಳ್ಳವನಾಗಲಿ. ಪ್ರಜಾಹಿತಕ್ಕಾಗಿಯೇ ದುಡಿಯಲಿ. ಶಾಸ್ತ್ರವಿಜ್ಞಾನದಿಂದ ಜ್ಞಾನಿಗಳೆನಿಸಿದ ಕವಿಗಳ ವಾಣಿ ಪ್ರಕಾಶಗೊಳ್ಳಲಿ; ಎಂಬ ವಿಚಾರದ ಕಾಳಿದಾಸನ ಈ ನುಡಿಯಲ್ಲಿ ಆಳವಾದ ಅರ್ಥವಿದೆ. ರಾಜನಾಗತಕ್ಕವನು-ಅಧಿಕಾರಿಯಾಗತಕ್ಕವನು ಜನರ ಹಿತಕಾರ್ಯವನ್ನು ಮಾಡಬೇಕು. ಪ್ರಜೆಗಳ ಸೇವೆಯೇ ರಾಜನ ಧರ್ಮ. ಪ್ರಜಾಹಿತದಿಂದಲೇ ಆತನಿಗೆ ರಾಜಪದವಿ. ಅಧಿಕಾರ ಪದವಿ.

ದೇಶದ ಉನ್ನತಿ ಅವನತಿ ಕವಿಗಳಿಂದ. ಅವರು ಶಾಸ್ತ್ರಜ್ಞಾನ ಪರಿಪೂರ್ಣರಾಗಿರಬೇಕು. ಜ್ಞಾನ ಪರಿಪೂರ್ಣರಾದ ಕವಿಗಳ ವಾಣಿ ದೇಶದ ಉದ್ಧಾರಕ್ಕಾಗುವುದು. ಲೇಖಕರು ಒಳ್ಳೆಯ ಜ್ಞಾನಿಗಳಾಗಬೇಕು. ವಿದ್ಯಾಜ್ಞಾನ ಶಾಸ್ತ್ರಜ್ಞಾನಗಳುಳ್ಳ ಲೇಖಕರಿಂದಲೇ ದೇಶಹಿತದ ಕಾರ್ಯವಾಗುವುದು. ಅಲ್ಲವಾದಲ್ಲಿ ಜನತೆಯಲ್ಲಿ ಕ್ಷೋಭೆ ಕ್ರಾಂತಿಗಳಾಗುವವು. ಲೇಖನಿಯು ದೇಶರಕ್ಷಣೆಗಿರುವ ಖಡ್ಗ. ಈ ಖಡ್ಗ ಎಲ್ಲರ ಕೈಯಲ್ಲೂ ಒಪ್ಪತಕ್ಕ ವಸ್ತುವಲ್ಲ. ನ್ಯಾಯಭೀತಿಯನ್ನು ಹುಟ್ಟಿಸುವ ಅಧಿಕಾರ ಧೋರಣೆಯ ರಕ್ಷಣೆಗುಳ್ಳುದು ಈ ಖಡ್ಗ.

ಲೇಖಕರು ಜ್ಞಾನದಿಂದ ತುಂಬಿದವರಾಗಿ ಜನರಲ್ಲಿ ತಿಳಿವಿನ ಬೆಳಕನ್ನು ಹಾರಾಡಿಸುವವರು. ಈ ಬೆಳಕಿನ ಮೂಲಕ ಜನರು ಲೋಕಯಾತ್ರೆ ಮಾಡತಕ್ಕವರು. ಲೋಕಯಾತ್ರೆಯ ಸಮಯ ಸರಿಯಾದ ದಾರಿಯನ್ನು ಕಂಡುಕೊಳ್ಳಲು ಈ ತಿಳಿವಿನ ಬೆಳಕು ಅಗತ್ಯ. ನಾಟಕ ಅಂತಹ ತಿಳಿವಿನ ಬೆಳಕನ್ನು ದೃಶ್ಯದ ಮೂಲಕ ಕೊಡುತ್ತಿದೆ.

ಜನರಲ್ಲಿ ಹೊಲಸು ವಿಚಾರ, ಕಲ್ಮಷ ವೃತ್ತಿಗಳು ಉಂಟಾಗದಂತೆ ಮಾಡುವ ಕರ್ತವ್ಯ ಲೇಖಕರದ್ದು. ಕೆಟ್ಟ ವಿಚಾರದ ಕೆಟ್ಟ ಕೆಲಸಗಳುಂಟಾಗುತ್ತಿರುವ ದೃಶ್ಯಗಳನ್ನು ನಾಟಕದಲ್ಲಿ ಇರಗೊಳಿಸುವುದು ಅನುಚಿತ. ಗಂಡಹೆಂಡಿರ ಜಗಳ. ಆ ಮೇಲೆ ಕೊನೆಗೆ ಕಸಬರಿಕೆಯ ಪ್ರಹಾರ, ದ್ವಂದ್ವ ಯುದ್ಧಗಳನ್ನು ರಂಗಮಂಚದಲ್ಲಿ ತರುವವರಿದ್ದಾರೆ. ಇದು ರಂಗಮಂಚಕ್ಕೆ

ಹಿತವಾದ ಕಾರ್ಯವಲ್ಲ. ಅಂತೆಯೇ ಹೊಲಸು ನುಡಿಗಳು ದೃಶ್ಯದ
ಕಡಿಮೆಯಾಗಿರಬೇಕು. ಲೋಕದಲ್ಲಿ ಇಂತಹ ಘಟನೆಗಳುಂಟಾಗುತ್ತಿಲ್ಲವೇ
ಇದ್ದುದನ್ನು ಇದ್ದಂತೆ ಕಾಣಿಸುವುದು ಯೋಗ್ಯವಲ್ಲವೇ ಎಂದು ವಾದಿ
ಬಹುದು. ಈ ಸತ್ಯವನ್ನು ತಿಳಿಸುವಲ್ಲಿಯೂ ಕವಿಯ ಕಾರ್ಯವಿದೆ. ಸ
ಸತ್ಯ ವಿಚಾರಗಳು ಇರಬಹುದು. ಸಮಾಜದ ಮುಂದೆ ಬಾಲ್ಯಾವಸ್ಥೆ
ನಗ್ನತೆಯುಳ್ಳವರಾಗುವುದಲ್ಲ. ಗಂಡು ಹೆಣ್ಣುಗಳ ರೂಪವನ್ನು ಯಾ
ನೋಡಿಲ್ಲ. ಎಲ್ಲರೂ ನೋಡಿರುವರೆಂದು ನಾವು ನಗ್ನರಾಗಿ ಸಂಚರಿಸು
ದಿಲ್ಲ. ಕವಿಗೂ ಈ ಭಾವನೆ ಬೇಕಿದೆ. ಸಮಾಜದ ಮುಂದೆ ಅವನ
ಮಾನವನ್ನು ರಕ್ಷಿಸಬೇಕಿದೆ. ನಾವು ಬಟ್ಟೆಯಿಂದ ಅಂಗಗಳನ್ನು ಮುಸು
ಮಾನವನ್ನು ರಕ್ಷಿಸುವಂತೆ ಗಂಡು ಹೆಣ್ಣು ಸಮಾಜದ ಮಾನವನ್ನು ಆವನ
ದೃಶ್ಯ ರಚನೆಯಲ್ಲಿ ರಂಗಮಂಚದಲ್ಲಿ ಕಾಯಬೇಕು. ಅನ್ಯಥಾ ಅವನೊಬ್
ಸಮಾಜಕ್ಕೆ ಅಪಮಾನವನ್ನು ತಂದೊಡ್ಡಿದವನೆನಿಸುವನು.

ನಾಟಕಗಳಲ್ಲಿ ಅಭಿನಯಕಾರರು ಈ ವಿಚಾರವನ್ನು ಅರಿತಿರಬೇಕು
ಅವರು ಹದಮೀರಿದ ನಟನೆ ಚೇಷ್ಟೆ, ಅಂಗಗಳ ಚೇಷ್ಟೆ ಅಂಗಗಳ ಚಲ
ವಲನಗಳಿಂದ ಸಮಾಜಕ್ಕೆ ಅಪಮಾನವನ್ನು ಮಾಡುತ್ತಿರುವರು. ಪೃಷ್ಠಭಾ
ವನ್ನು ನಟನೆಂದೂ ಸಭೆಗೆ ಕಾಣಿಸಕೂಡದು. ಅಲ್ಲದೆ ಭಂಡು ಹಾಸ್ಯದ ಕ
ಚೇಷ್ಟೆ ಮತ್ತು ಮಾತುಗಳನ್ನು ಹೇಳಕೂಡದು.

ಆರಾಧನೆಗುಳ್ಳುದು ಸಮಾಜ. ಈ ಆರಾಧನೆಗುಳ್ಳ ದೇಗುಲ ರಂ
ಮಂಚ. ರಂಗಮಂಚದಲ್ಲಿ ಬೀಭತ್ಸ ಹಾಗೂ ಮಲೀಮಸ ವಸ್ತುಗಳನ್
ಚೆಲ್ಲುವ ವಿಸರ್ಜಿಸುವ ಕೆಲಸ ನಟರಿಂದಾಗಕೂಡದು.

ದೃಶ್ಯದಲ್ಲಿ ಹೆಂಡದಂಗಡಿಯ ದೃಶ್ಯ ಬೇಡ. ಅದನ್ನು ಕಾಣುವ ಕಾ
ಸುವ ಅಗತ್ಯವಿಲ್ಲ. ಕುಡುಕನು ಕುಡಿದು ಕುಡಿಯುತ್ತಾ ಬರುವ ದೃಶ
ಬೇಕು. ಅಮಲನ್ನು ಸೇವಿಸಿದ ನಂತರ ಅದರಿಂದಾದ ಪರಿಣಾಮದ ದೃಶ
ಬೇಕಿದೆ. ಕುಡುಕನು ಮಿತಿಮೀರಿ ಕುಡಿಯಲಿ. ಅವನು ತನ್ನನ್ನು ಕುಡು
ನಾಗಿ ಎಣಿಸಲಾರ. ಕಳ್ಳನು ಕದ್ದರೂ ಕಳ್ಳಲಿಲ್ಲವೆಂಬ ಮಾತನ್ನೇ ಹೇಳ
ವನು. ಕುಡುಕನು ಅಮಲನ್ನು ಸೇವಿಸಿ ಅವನಾಗಿ ಅವನಷ್ಟಕ್ಕೆ ಮಾ
ನಾಡುವ ದೃಶ್ಯವನ್ನು ಕಾಣುತ್ತಿರುವೆವು. ಅಂತೆಯೇ ಸ್ವಗತದ ದೃಶ್ಯವನ

ಕಾಣುವೆವು. ಉತ್ತಮ ನಾಟಕಕಾರರು ಸ್ವಗತಕ್ಕೆ ಎಡೆಗೊಡರು. ಹುಚ್ಚರ ಸಂಪ್ರದಾಯ ಇದು. ಎಂದೂ ಸಮಾಜದಲ್ಲಿ ಈ ಘಟನೆಯಾಗದು. ಕುಡುಕನು ಅವನ ಸಂಗತಿಯೊಡನೆ ಮಾತುಕತೆ ನಡೆಸಬಹುದು. ಕುಡುಕನಲ್ಲದ ಸಂಗಾತಿಯೊಡನೆ ಮಾತನಾಡಬಹುದು. ಮಾತನಾಡುವಾಗ ಅವನು ಹಿಂದು ಮುಂದಾಗಬೇಕು ಅಮಲಿನಿಂದ ಆತನಿಗೆ ಪ್ರತಿಯೊಂದು ವಸ್ತುಗಳು ತಿರುಗುವಂತೆ ಸವಿಾಪಿಸುವಂತೆ ನೆಲೆತಪ್ಪಿದಂತೆ ತೋರಿ ಒಂದೊಂದು ಚೇಷ್ಟೆಗೊಳ್ಳಬಹುದು. ಭ್ರಮೆ ಅವನಲ್ಲಿ ಮುಖ್ಯವಾಗಿ ಬರಬೇಕು. ಈ ಭ್ರಮೆಯಿಂದ ಹಗಲನ್ನು ರಾತ್ರಿಯಾಗಿಯೂ, ರಾತ್ರಿಯನ್ನು ಹಗಲಾಗಿಯೂ ತಿಳಿಯಬಹುದು. ಅದರಿಂದ ಸಮಯ ಭೇದದ ಎಲ್ಲಾ ಕೃತ್ಯಗಳ ವಿಚಾರ ವರ್ತನೆ ಕುಡುಕನ ಪಾತ್ರದಲ್ಲಿ ಕಾಣಬಹುದು. ತಿಳಿವು ಕೆಟ್ಟುಹೋದ ವರ್ತನೆಗಳೇ ಕುಡುಕತನವು. ಹೆಂಡತಿಯನ್ನು ಮನೆಯವರನ್ನು ಮೋಸಗೊಳಿಸುವ ಕೆಲಸಗಳು ಕುಡುಕನಲ್ಲಿರುತ್ತವೆ. ಇವುಗಳನ್ನು ಕಾಣಿಸುವುದಕ್ಕಿಂತ ಕುಟುಂಬದ ದ್ರೋಹ ಯಾ ಅನ್ಯರಿಗೆ ದ್ರೋಹವನ್ನುಂಟುಮಾಡಿ ಆತ್ಮ ವಿನಾಶಕ್ಕೆ ಗುರಿಯಾಗುವುದನ್ನು ರಂಗ ಮಂಚದಲ್ಲಿ ತೋರಿಸಬಹುದು. ಇದರಿಂದ ಸಮಾಜಕ್ಕೆ ತುಂಬಾ ಪರಿಣಾಮವಾಗುವುದು.

ಸುಳ್ಳು ಹೇಳುವ ಮಕ್ಕಳು ಸತ್ಯ ವರ್ತನೆಯ ತಂದೆ ಯಾರು ಲೋಕದಲ್ಲಿ ಎಷ್ಟಿಲ್ಲ? ಮಗನ ಸುಳ್ಳುಗಾರಿಕೆಯ ಪ್ರಬಲತೆ, ಅದನ್ನು ಕಂಡು ಕೇಳಿ ನೊಂದು ಕೊರಗುವ ತಂದೆ ಇವೆರಡು ಭೀಷಣ ಹೃದಯ ಘರ್ಷಣೆಯವು. ಈ ಹೃದಯ ಘರ್ಷಣೆಯನ್ನು ಸಮಾಜಕ್ಕೆ ಮಾಡಿಸಿ ಬಿಡುವುದರಲ್ಲಿ ನಾಟಕಕಾರನ ಚಮತ್ಕೃತಿ ಇದೆ. ಸಮಾಜ ಮಕ್ಕಳ ತಪ್ಪನ್ನು ಕಾಣಬೇಕು. ತಂದೆಯೊಂದಿಗೇ ನೋಯಬೇಕು. ಕುಡುಕನ ತಪ್ಪನ್ನು ತಿಳಿಯಬೇಕು. ಅವನ ಕುಟುಂಬಕ್ಕುಂಟಾಗುವ ಹಾನಿಯನ್ನು ಕಾಣಬೇಕು. ಕಂಡು ಕೆರಳುವಂತಾಗಬೇಕು. ಇಂತಹ ದೃಶ್ಯ ಘಟನೆ ಮತ್ತು ಅಭಿನಯ ಬೇಕು.

ಅಭಿನಯಕ್ಕೆ ಯೋಗ್ಯವಾದ ನಾಟಕವಾಗಬೇಕು. ಒಂದು ಅಂಕದಲ್ಲಿ ನಾಯಕನ ಬಾಲ್ಯ. ಇನ್ನೊಂದು ಅಂಕದಲ್ಲಿ ಮುದುಕತನ ಬರಕೂಡದು. ಇದರಿಂದ ಪಾತ್ರಧಾರಿಗೆ ವೇಷಭೂಷಣಕ್ಕೆ ಬೇಕಾದ ಸಮಯ ಉಂಟಾಗದು. ನಾಟಕದ ಪಾತ್ರಕಲ್ಪನೆಯ ವಿಷಯದಲ್ಲಿ ಲೇಖಕರು ಎಚ್ಚರತಪ್ಪಿದವರಾಗು

ಕೂಡದು. ಮೊದಲನೆಯ ಅಂಕದಲ್ಲಿ ವಿವಾಹವಾದರೆ ಆ ಬಳಿಕ ಅವ
ಜೀವನ ವಿಚಾರವನ್ನು ಎರಡನೆ ಅಂಕದಲ್ಲಿ ಅನ್ಯ ಪಾತ್ರಗಳಿಂದ ತರಿ
ಹಲವಾರು ವರ್ಷಗಳ ಬಾಳುವೆಯು ಅವರ ಸುಖ ದುಃಖದ ಪರಿಸ್ಥಿ
ಯನ್ನು ಸಮಾಜಕ್ಕೆ ತಿಳುಹುವುದು ಲೇಖಕನ ಚಮತ್ಕೃತಿಗೆ ಸೇರಿದ್ದು
ಒಂದೊಂದು ಅಂಕದಲ್ಲಿಯೂ ಒಂದೇ ದಿನದ ಘಟನೆಯು ಇರಬೇಕ
ಮುಖ್ಯವಾಗಿ ಒಂದೇ ಹೊತ್ತಿನ ಘಟನೆ ಇರಬೇಕು. ಇದನ್ನು ನಾವು ಗಮನಿ
ಬೇಕಾಗಿದೆ.

ಚಾರಿತ್ರಿಕ ನಾಟಕಗಳನ್ನು ಬರೆಯುವಾಗ ಆ ವ್ಯಕ್ತಿಗಳಿಗೆ ಒಡಕಾ
ಕೂಡದು. ಅದಲ್ಲದೆ ದೇಶ ಕಾಲಕ್ಕೆ ಅನುಗುಣವಾದ ವೇಷ ಭೂಷಣಗಳನ
ಧರಿಸಬೇಕು. ಅದನ್ನು ಕೊಡಬೇಕು. ಅದಿರದೆ ಚಾರಿತ್ರಿಕ ವ್ಯಕ್ತಿಗ
ಮೇಲೆ ಕಳಂಕ ಒಡ್ಡಕೂಡದು. ದೇಶದ ಮಹಾವ್ಯಕ್ತಿಗಳ ಜೀವನ ಚರಿತ್ರೆಯ
ನಾಟಕಗಳಲ್ಲಿ ಇದನ್ನು ನಾವು ಮುಖ್ಯವಾಗಿ ಗಮನಿಸಬೇಕು. ಅದಲ್ಲ
ಅವರ ಮಾತುಕತೆಗಳಲ್ಲಿಯೂ ಗೌರವ ಸಂರಕ್ಷಣೆಯ ಕಾರ್ಯಬೇಕು. ದೇ
ಕ್ಕಾಗಿ ತ್ಯಾಗ ಮತ್ತು ಸಾಹಸ ಕೃತ್ಯಗಳನ್ನು ಚಿತ್ರಿಸುವಲ್ಲಿ ಕವಿಯೂ ಅ
ನಯಕಾರನೂ ಹಿಂದುಳಿಯಕೂಡದು. ಹಿಂದುಳಿದು ಆ ವ್ಯಕ್ತಿಯ ಗೌರವ
ಕಳಂಕ ತಂದೊಡ್ಡಿದರೆ ಲೇಖಕ ಮತ್ತು ಪಾತ್ರಗಾರರು ಮಹಾಪರಾಧಿಗಳೆ
ಸುವರು. ಚಾರಿತ್ರಿಕ ವ್ಯಕ್ತಿಗಳಲ್ಲಿ ಗೌರವವನ್ನು ಹುಟ್ಟಿಸುವುದು ಮುಖ
ಕರ್ತವ್ಯ. ಇದರಿಂದಲೇ ದೇಶದ ಪ್ರಗತಿಯುಂಟಾಗುವುದು. ದಶರಥ
ಮಗ ಶ್ರೀ ರಾಮನನ್ನು ಇಂದಿನ ನವಯುಗದ ವೇಷಭೂಷಣಗಳಿಂದ ರಂ
ಮಂಚಕ್ಕೆ ತರುವುದು ಉಚಿತವಲ್ಲ. ದಶರಥನ ಆಸ್ಥಾನದ ವೈಭ
ಆ ಕಾಲದ ಉಡುಗೆ ತೊಡಿಗೆ ಮೊದಲಾದುವುಗಳು ಪ್ರೇಕ್ಷಕರಿಗೆ ಕಾಣ
ವಂತಾಗಬೇಕು. ಇದಿರದೆ ಮಾಡಿದ ಅಭಿನಯ, ಚರಿತ್ರೆಯ ಕೊಲೆಗಾಗುವುದು
ಚಾರಿತ್ರಿಕ ವ್ಯಕ್ತಿಯ ಅಪಮಾನಕ್ಕಾಗುವುದು. ಏನೂ ತಿಳಿಯದ ಹುಡುಗನ
ಇದೇ ರಾಮರಾಜ್ಯವೆಂದು ತಿಳಿಯುವನು. ರಾಮರಾಜ್ಯದ ವೈಭವವನ್ನ
ರಂಗಮಂಚದಲ್ಲಿ ಕಾಣಿಸಬೇಕು. ಇದೆಲ್ಲಾ ಬಿಟ್ಟು ಸೀತೆಗೆ ರಿಬ್ಬನ್ನನು
ತೊಡಿಸಿದ ದೃಶ್ಯವನ್ನು ಕಂಡರೆ ಮನಸ್ಸು ಸಮಾಧಾನಗೊಳ್ಳುವುದೇ? ಇಂತಹ
ದನ್ನು ಕಾಣುವ ಸಂದರ್ಭ ನಮಗಾಗಕೂಡದು.

ನಾಟಕವನ್ನು ಬರೆಯುವ ಕೆಲಸ ಅತಿ ಗಹನ. ಈ ಗಹನ ಕಾರ್ಯಕ್ಕೆ ಇಳಿಯುವ ನಾಟಕಕಾರ ದೇಶ ಕಾಲ ಪ್ರಮಾಣಜ್ಞನಾಗಿಯೇ ಇರಬೇಕು. ಇಂದಣ ಯುವಕ ಯುವತಿಯರ ಉಡುಪನ್ನು ಪುರಾಣ ವ್ಯಕ್ತಿಗಳಿಗೆ ಚಾರಿತ್ರಿಕ ವ್ಯಕ್ತಿಗಳಿಗೆ ಕೊಡಕೂಡದು. ಮಾತುಕತೆಯಲ್ಲೂ ಇದನ್ನು ಬಲ್ಲರಾಗಬೇಕು. ಚಾ ಸತ್ಕಾರ ಹೊಗೆಬತ್ತಿಗಳನ್ನು ಎಲ್ಲೆಡೆಯಲ್ಲೂ ಕಾಣಿಸುವುದು ವಿಹಿತವಲ್ಲ. ತಮ್ಮ ಅಭ್ಯಾಸಗಳನ್ನು ದೇಶ ಕಾಲದ ಪಾತ್ರಾನುಗುಣವಾಗಿ ಮಾರ್ಪಡಿಸಬೇಕು. ಇಂತಹ ಮಾರ್ಪಾಟು ವೇಷಭೂಷಣದೊಂದಿಗೆ ನೇಪಥ್ಯ ವಿಧಾನದೊಂದಿಗೆ ಕಾಣಬೇಕು.

ನಾಟಕ ಪಾತ್ರಗಳ ಭಾಷೆಯಲ್ಲಿ ವಿಭಿನ್ನತೆ ಬೇಕು. ಶಿಕ್ಷಿತ ಅಶಿಕ್ಷಿತರ ಮಾತುಗಾರಿಕೆಯಲ್ಲಿ ಭೇದ ಇದ್ದೇ ಇದೆ. ಇದೇ ಭೇದ ಪ್ರತಿ ವ್ಯಕ್ತಿಯ ನುಡಿಯಲ್ಲಿದೆ. ನಾಟಕ ಪಾತ್ರಗಳ ಚರಿತ್ರೆಗೆ ಅನುಕೂಲವಾದ ಭಾಷೆ ಇರಬೇಕು. ಮಗು ನುಡಿಯುವಾಗ ತೊದಲಿರುತ್ತದೆ. ಆ ತೊದಲನ್ನು ಲೇಖಕನು ಮಗುವಿನ ಪಾತ್ರಕ್ಕೆ ತರಲೇಬೇಕು. ಮಕ್ಕಳ ಮನೋಧರ್ಮವನ್ನರಿತ ಮಾತುಕತೆ ಪ್ರಶ್ನೆಗಳಿರಬೇಕು. ಮಗುವಲ್ಲಿ ಮುದುಕನ ಜ್ಞಾನವಿರದು. ಇದನ್ನರಿತು ಮಗುವಿನ ಪಾತ್ರಕ್ಕೊಪ್ಪುವ ಭಾಷೆ ವಿಚಾರಜ್ಞಾನಗಳನ್ನು ತರಬೇಕು. ಉತ್ತಮ ನಾಟಕಕಾರರು ಪ್ರತಿ ವ್ಯಕ್ತಿಯ ಗುಣಶೀಲಗಳಿಗನುಸಾರವಾದ ಮಾತುಗಳನ್ನೇ ಅವರ ಮುಖದಿಂದ ಹೊರಡಿಸುವರು.

ಗಂಡು ಯಾವಾಗಲೂ ದುಡಿಯುವವ. ಅವನು ತನ್ನ ಜೀವನದಲ್ಲಿ ಕಷ್ಟ ಸಂಕಷ್ಟಗಳನ್ನು ಎದುರಿಸುವವನಿದ್ದು ಅದನ್ನೇ ಹೇಳುತ್ತಿರುವನು. ಹೆಣ್ಣು ಸುಖವನ್ನು ಬಯಸುತ್ತಿರುವವಳು. ಆಕೆಯ ಕಣ್ಣು ಸುಖದ ಕಡೆಗೆ. ಇದರಿಂದ ವಿಧವೆ ಹೆಂಗಸಾದರೂ ದುಃಖದಲ್ಲೂ ತನ್ನ ಪತಿಯೊಡನಿದ್ದ ಸೌಭಾಗ್ಯ ಸುಖವನ್ನು ಹೇಳುತ್ತಿರುವಳು. ಗಂಡಸು ತಾನು ಮಾಡಿದ ಸಾಹಸ ಕಾರ್ಯದಲ್ಲಿ ತನಗುಂಟಾದ ವಿಘ್ನ ವಿಡ್ಡೂರಗಳನ್ನೇ ಹೇಳುತ್ತಿರುವನು. ಇದನ್ನರಿಯದ ನಾಟಕಕಾರರು ಹಲವರಿದ್ದು ಮನೋಧರ್ಮವನ್ನು ಬಿಟ್ಟವರಾಗಿರುತ್ತಾರೆ.

ಹೆಣ್ಣು ಎಷ್ಟೇ ಕುರೂಪಿ ಇರಲಿ, ಆಕೆಯೊಡನೆ ನೀನು ಚೆಲುವೆಯಲ್ಲವೆಂದರೆ ಸಿಟ್ಟು ಆಕೆಗೆ ಬಾರದುಳಿಯದು. ಕುರೂಪಿಯಾದರೂ ಸಿಂಗರಿಸು

ವುದರಲ್ಲಿ ಆಸಕ್ತಿಯುಳ್ಳವಳಾಗುವಳು. ಯಾವ ಗಂಡಸೇ ಇರಲಿ. ನೀ
ಹೇಡಿ. ಪೌರುಷ ನಿನಗಿಲ್ಲವೆಂದರೆ ರೇಗುವನು. ಗಂಡು ಹೆಣ್ಣುಗಳಲ್ಲಿ
ಮನೋಧರ್ಮವಿದೆ. ಇದನ್ನು ಕಂಡುಕೊಳ್ಳಬೇಕು.

ನಾಟಕಗಳಲ್ಲಿ ಸಂವಾದ ಇದ್ದೇ ಇದೆ. ಸಂವಾದಕ್ಕೆ ಬೇಕಾದಷ
ಪಾತ್ರಗಳು ರಂಗಮಂಚದಲ್ಲಿದ್ದರೆ ಸಾಕು. ಹಲವಾರು ಪಾತ್ರಗಳನ್ನು ರಚ
ಅವರನ್ನು ಬಾಯಾಕಳಿಸುವಂತೆ ಮಾಡಕೂಡದು. ಮಾತು ಇದ್ದ ಪಾ
ವಿದ್ದರೆ ಸಾಕು. ಹತ್ತಾರು ಪಾತ್ರಗಳನ್ನು ಮಾಡಿಸಿ ಅವರನ್ನು ಗೊಂಬೆಗಳ
ಇರಿಸಕೂಡದು.

ನಾಟಕಗಳಲ್ಲಿ ಹಾಸ್ಯಕ್ಕೆ ಬ್ರಾಹ್ಮಣನ ಪಾತ್ರವನ್ನು ತರುವ
ಇದೊಂದು ಸಂಪ್ರದಾಯವಾಗಿದೆ. ಊಟ ಉಪಚಾರ ಲಡ್ಡುಗೆಗಳೇ ಹಾ
ವಿಚಾರಗಳು ಇದಲ್ಲ. ಹಾಸ್ಯ ಕರುಣೆಯನ್ನು ಮೂಡಿಸುವುದಾಗಿರಬೇಕ
ಹಾಸ್ಯದಲ್ಲಿ ಅನುಕಂಪ ಬೆರೆತಿರಬೇಕು. ಮೃಚ್ಛಕಟಿಕದ ವಿದೂಷಕ ಇ
ಹವ. ಅವನ ಹಾಸ್ಯ ಚಾರುದತ್ತನ ಮೇಲೆ ಅನುಕಂಪವನ್ನು ತೋರುತ್ತ
ಶಕಾರ ನಗು ನಗು ಅಳು ಅಳು ಎಂದು ಹೇಳುವಾಗ ಅವನು ಕೊಡುತ್ತಿರು
ಉತ್ತರದ ಮಾತುಗಳು ಹಾಸ್ಯದವಾದರೂ ಚಾರುದತ್ತನ ದೀನಾವಸ್ಥೆಯ ಕುರಿ
ನೋವುಂಡವುಗಳಾಗಿವೆ.

ಇಂದು ಹಲವರು ಹಾಸ್ಯವೆಂದರೇನೆಂದು ತಿಳಿದಂತಿಲ್ಲ. ಹಳ್ಳಿಗರಾಗ
ನಾಗರಿಕನಾಗಲಿ ಹಾಸ್ಯಕ್ಕೆ ತುತ್ತಾಗುತ್ತಾರೆ. ಮತಿವಿಕಳತನದ ಚೇಷ್ಟೆಯಿಂ
ಹಾಸ್ಯವಾಗಬೇಕು. ಇಂತಹ ಹಾಸ್ಯದಿಂದ ಹೃದಯದಲ್ಲಿ ಕರುಣೆಯೊಡೆಯ
ತ್ತದೆ. ದಂಪತಿಗಳ ಪಡಸಾಲೆಯ ಮಂಚದಡಿ ಗೊರಕೆ ಹೊಡೆದು ವಿಚಿ
ಸ್ವರ ಎಬ್ಬಿಸಿ ಹಾಸ್ಯವನ್ನು ಮಾಡುವುದು ಅಸಭ್ಯ. ಇದು ಅಶ್ಲೀಲತೆ ಇ
ಕೂಡದು.

ಎಳೆ ಮಕ್ಕಳು ಆಡುವ ಆಟದಿಂದ ನಗು ಬರುತ್ತದೆ. ಹಿರಿಯ
ಅಂಗಿ ಟೊಪ್ಪಿಗಳನ್ನು ಧರಿಸಿ ಬಂದು ಸುಮ್ಮನೆ ಕೂತು ಪತ್ರಿಕೆಯೊದುವು
ಹಿರಿಯರು ಮಾಡಿದ ಚೇಷ್ಟೆಯನ್ನು ಮಾಡುವುದು ಇವುಗಳಿಂದ ಚೇ
ಹುಟ್ಟುತ್ತಿದೆ. ಈ ಹಾಸ್ಯದಲ್ಲಿ ರುಚಿಯಿದೆ. ಆದರೆ ಉತ್ತಮ ತರಹ
ಹಾಸ್ಯ ವಿಕೃತಿ ಪ್ರದರ್ಶನಗಳಿಂದ ಹೊರಹೊಮ್ಮಿದುದಲ್ಲ. ಕರುಣೆಯನ

ಹುಟ್ಟಿಸುವ ನೋವನ್ನು ಮೂಡಿಸುವ ಹಾಸ್ಯ ಹಿರಿದು. ಇದನ್ನು ಶೂದ್ರಕನ ಮೃಚ್ಛಕಟಿಕದ ಮತ್ತು ದ್ವಿಜೇಂದ್ರಲಾಲರ ಶಾಜಹಾನ್ ನಾಟಕದ ವಿದೂಷಕರಲ್ಲಿ ಕಾಣುವೆವು. ಹಳಬರಾಟದಿಂದ ಉಡುಪುಗಳ ಅಸ್ತವ್ಯಸ್ತ ಧಾರಣೆಯಿಂದ, ಕಳ್ಳನ ಕದಿಯುವಿಕೆಯ ಕೃತ್ಯದಿಂದ ಹಾಸ್ಯದ ವಸ್ತುಗಳನ್ನು ಹೊಂದುತ್ತಿರುವೆವು. ಆದರೆ ಅವರ ಈ ವೃತ್ತಿಯಲ್ಲಿರುವ ಹಾಸ್ಯವಸ್ತು ಮೇಲ್ಮಟ್ಟದ್ದಲ್ಲ.

ದೃಶ್ಯದಲ್ಲಿ ಎಲ್ಲಾ ರಸಗಳೂ ಇವೆ. ರಸದ ಪುಷ್ಟಿಯನ್ನು ಮಾಡಲು ಇತರ ಪಾತ್ರಗಳು ಸಹಾಯಕಗಳಾಗಬೇಕು. ನಾಯಕ ನಾಯಕಿ ಪಾತ್ರದ ರಸ ಪರಿಪೋಷಣಕ್ಕಾಗಿ ನಾಟಕ ಪಾತ್ರ ಕಲ್ಪನೆಯಾಗಬೇಕು. ಅಂಧ ವಿಶ್ವಾಸಾದಿಗಳಿಂದ ಸಮಾಜ ಹಾಳಾಗುತ್ತಿದೆ. ಅದನ್ನು ತಿದ್ದುವುದು ಹಾಸ್ಯದ ಮೂಲಕ ಸುಲಭಸಾಧ್ಯ. ಇದನ್ನು ನಾಟಕಕಾರರು ಮನದಲ್ಲಿಟ್ಟು ಸಮಾಜ ಸುಧಾರಕರೆನಿಸಬೇಕು. ಸಮಾಜ ಸುಧಾರಣೆಯಲ್ಲಿ ಗಂಡುಸಿಗೂ ಹೆಂಗುಸಿಗೂ ಸಮಾನವಾದ ಅಧಿಕಾರ ಸ್ವಾತಂತ್ರ್ಯಗಳಿರುತ್ತದೆ. ಸ್ತ್ರೀ ಪಾತ್ರ ಕಲ್ಪನೆಯನ್ನು ಮಾಡುವಾಗ ಭಾರತೀಯ ಸಂಸ್ಕೃತಿಯನ್ನು ಮರೆಯಕೂಡದು. ಸ್ತ್ರೀಗೆ ಪಾಶ್ಚಾತ್ಯ ಸಂಸ್ಕೃತಿಯು ಸಾಧಕವೂ ಬಾಧಕವೂ ಅಹುದು. ಗೃಹ ನಾಯಿಕೆ ನಾಯಕನ ಗುಣದೋಷಗಳನ್ನು ಸಮಾಜದ ಮುಂದಿರಿಸುವವಳಾಗಬೇಕು. ಈ ಕರ್ತವ್ಯದ ನಡತೆ ಅಸಭ್ಯ ಹಾಗೂ ಅಶ್ಲೀಲಗಳಾಗಿರಕೂಡದು. ಕರುಣೆ ಇಲ್ಲವೇ ಹಾಸ್ಯದ ಸನ್ನಿವೇಶಗಳು ಇದನ್ನು ಬಯಲಿಗೆ ತರಬಲ್ಲವು. ಪಾಶ್ಚಾತ್ಯ ಸಂಸ್ಕೃತಿಗೆ ಸೋತ ಪುರುಷನು ಏನೇನು ಹುಚ್ಚಾಟಗೊಳ್ಳುತ್ತಿಲ್ಲ. ಈ ಹುಚ್ಚಾಟದ ಮೂಲಕ ಭಾರತದ ಮಹಿಳೆಯರು ನುಚ್ಚುನೂರಾಗುತಿದ್ದಾರೆ. ಪುರುಷರಂತೆ ಸ್ತ್ರೀಯರೂ ಕೆಡುತ್ತಿರುವರು. ಇದನ್ನು ಭಾರತದ ಉನ್ನತಿಯನ್ನು ಬಯಸುವ ನಾಟಕಕಾರನು ತಡೆಯದೆ ಉಳಿಯಲಾರನು.

ಲೋಕ ಕಲ್ಯಾಣದ ಸಾಧನೆಯೇ ಸಾಹಿತ್ಯದ ಗುರಿ. ಈ ಉದ್ದೇಶ ಸಾಧನೆಯಲ್ಲಿ ಗಂಡು ಹೆಣ್ಣುಗಳಿಗೆ ಸಮಾನಾವಕಾಶವಿದೆ. ಇದರಿಂದಲೇ ಪ್ರಾಚೀನರು ಸೂತ್ರಧಾರನೊಂದಿಗೆ ನಟಿಯರನ್ನೂ ಕೂಡಿಸಿರುವರು. ರಂಗಮಂಚದ ಸುಖ ಸೌಕರ್ಯಗಳ ದೃಷ್ಟಿಯಿಂದಲೇ ಈ ಕಲ್ಪನೆಯನ್ನು ಮಾಡಿರುತ್ತಾರೆ. ಸ್ತ್ರೀಯರ ನೇಪಥ್ಯಕ್ಕೆ ಗಮನಕೊಡುವಂತೆ ಸ್ತ್ರೀ ಪಾತ್ರದ ನೇಪಥ್ಯ

ವಿಧಾನದಲ್ಲೂ ಗಮನಿಸಬೇಕು. ವಯೋಮಾನ ಕಲ್ಪನೆಯು ಅಗತ್ಯವಿದ
ನಟೀ ನಟರ ಆಯ್ಕೆಯಲ್ಲಿ ವಯೋಮಾನಕ್ಕೆ ಪ್ರಾಧಾನ್ಯವಿದೆ. ಪ್ರೇಕ್ಷಕ
ಮನಸ್ಸಿಗೆ ಮತ್ತು ಸಮಾಜಕ್ಕೆ ಜುಗುಪ್ಸೆಯುಂಟಾಗುವಂತೆ ಸ್ತ್ರೀ ಪಾತ್ರರಚ
ಯಿಂದಾಗಕೂಡದು.

ಭಾರತದ ಪ್ರಾಚೀನ ನಾಟಕಕಾರರು ಸಮಾಜದ ಸುಧಾರಣೆಗಾಗಿಯೆ
ನಾಟಕದಲ್ಲಿ ಬಹು ಭೇದವನ್ನು ಮಾಡಿರುವರು. ಬೇರೆ ಬೇರೆ ರಸಗಳಿಂ
ಬೇರೆ ತರಹದ ನಾಯಕ ವರ್ಗದಿಂದ ನಾಟಕ ಭೇದಗಳನ್ನು ಮಾಡಿ
ಪ್ರಾಚೀನರು ಸಮಾಜವನ್ನು ಮರೆತಿಲ್ಲ. ಇಂದಿನ ನಾಟಕಕಾರರು ಜನತೆಯ
ಬಿಕ್ಕಟನ್ನು ದೂರಗೊಳಿಸುವ ಕೆಲಸಕ್ಕೆ ನೆರವಾಗಲಿಲ್ಲ. ಕನ್ನಡದ ಆಧುನಿ
ನಾಟಕ ಬರೆಹಗಾರರು ಶೃಂಗಾರ ಮತ್ತು ಹಾಸ್ಯಗಳ ಕಡೆಗೆ ಗಮನಕೊಟ್ಟಂ
ಕಾಣಬರುತ್ತಿರುವರು. ದೇಶಹಿತಕ್ಕಾಗಿ ಮಾಡತಕ್ಕ ದಾನ, ದಯಾ, ಧರ್ಮ
ಗಳ ಭಾವನೆಯನ್ನು ಮೂಡಿಸಿ ಈ ವೀರತನದ ಕೆಚ್ಚೆದೆಯುಂಟಾಗುವಂ
ಸಮಾಜವನ್ನು ಪ್ರೋತ್ಸಾಹಿಸುತ್ತಿಲ್ಲ. ವೀರರಸವೇ ದಾನ ದಯಾ ಧರ್ಮ
ಭೇದಗಳಿಂದ ಭಿನ್ನಭಿನ್ನವಾಗುತ್ತವೆ. ದಾನಶೂರರೂ, ದಯಾಶೂರರೂ
ಧರ್ಮಶೂರರೂ ಎನಿಸಿದ ಮಂದಿಗಳಾಗಿ ಬಾಳುವುದರಿಂದ ದೇಶದ ಮೇಲ
ಯುಂಟಾಗುತ್ತಿದೆ. ದೇಶದ ಮೇಲ್ಮೆಯ ಅಡಿಗಟ್ಟಿನ ತಳಹದಿಯನ್ನಿರಿಸಿಯೆ
ನಾಟಕದ ಕಲ್ಪನೆಯಾಗಬೇಕು. ಕನ್ನಡದ ಲೇಖಕರಲ್ಲಿ ಶ್ರೀ। ಕೊ
ಶಿ. ಕಾರಂತರ ನಾಟಕಗಳು ರಾಜಕೀಯ ವಿಚಾರಗಳನ್ನು ಚಿತ್ರಿಸಿವೆ. “ಗ
ವರ ಸತ್ಯ”ವೇ ಮೊದಲಾದುವು ಇಂತಹವು. ದಿವಂಗತ ಕೈಲಾಸಂರವ
ನಾಟಕಗಳು ಮರ್ಮಸ್ಪರ್ಶಿಗಳಾಗಿವೆ. ಆದರೆ ಅವರ ಭಾಷೆ ಮತ್ತು ನಾಟ
ಗಳು ಅಧಿಕವಾಗಿ ಪಾಶ್ಚಾತ್ಯರ ಸೋಗಿಗೆ ಮಾರು ಹೋಕ್ಕಿವೆ. ಶ್ರೀ। ಅ
ನ. ಕೃಷ್ಣರಾಯರ ನಾಟಕಗಳನ್ನು ಅಭಿನಯಿಸಲು ಸ್ಫೂರ್ತಿಯುತವಾ
ಭಾವನೆಗಳನ್ನು ತಂದೊಡ್ಡುತ್ತವೆ. ಶ್ರೀ। ಕುಡ್ಪಿ ವಾಸುದೇವ ಶೆ
ಯವರು ಹಾಸ್ಯರಸವನ್ನು ತುಂಬುವ ನಾಟಕಗಳನ್ನು ಬರೆದಿರುತ್ತಾರೆ
ದಿವಂಗತ ಎಮ್. ಎಸ್. ಕಾಮತರ ನಾಟಕಗಳು ಶಾಲಾ ವಿದ್ಯಾರ್ಥಿ
ಗಳ ಸಲುವಾಗಿಯೇ ಬರೆದವು. ವಿದ್ಯಾರ್ಥಿ ದಶೆಗೆ ಸಂಬಂಧಿಸಿ
ವಿಚಾರ ಭಾವನೆಗಳು ಅವುಗಳಲ್ಲಿ ಸೇರಿಲ್ಲ. ಅವುಗಳಲ್ಲಿ ಕಥಾವಸ್ತುಗಳ

ಪ್ರಾಚೀನ ಅಥವಾ ಅಂಧವಿಶ್ವಾಸ ಜಾಡ್ಯಕ್ಕೆ ಸಂಬಂಧಿಸಿದವು. **ಶ್ರೀ। ಪುಟ್ಟಪ್ಪ** ನವರ ಕೃತಿಗಳು ಸಮಾಜಕ್ಕೆ ಸಂಬಂಧಿಸಿದವು. ಜಾತಿಧರ್ಮಗಳ ಉಚ್ಚ ನೀಚ ಭಾವನೆಯ ಕಲುಷ ವೃತ್ತಿಯನ್ನು ಕಣ್ಣಮುಂದೆ ತೋರುತ್ತಿವೆ. **ಶ್ರೀ। ವಿ.** ಸೀಯವರು ಉನ್ನತ ವಿಚಾರ ಭಾವನೆಗಳಿಂದ ಕೂಡಿ ಅವನ್ನು ಸಮಾಜಕ್ಕೆ ಅರುಹುತ್ತಿರುವರು. **ಶ್ರೀಗಳಾದ ನಾ. ಕಸ್ತೂರಿ, ಶ್ರೀ। ರಂಗ** "ಪರ್ವತವಾಣಿ" ಮೊದಲಾದವರು ತಮ್ಮ ಕೃತಿಗಳಿಂದ ಕನ್ನಡಿಗರಿಗೆ ಬಹು ಪರಿಚಿತರೆನಿಸಿರುವರು. ಅವರ ಕೃತಿಗಳು ಹೃದಯ ಘರ್ಷಣೆಯನ್ನು ವಿಚಾರ ದೊಂದಿಗೆ ಮಾಡಬಲ್ಲುವು. ಸತ್ಯ ನೈಜತೆಯ ಸೌಂದರ್ಯದ ವಿನಾ ನಾಟಕ ಸುಂದರವೆನಿಸದು. ಸತ್ಯ ನೈಜತೆಗಳನ್ನು ತರುವುದು ಕಷ್ಟದ ಕೆಲಸ. **ರಾಷ್ಟ್ರ ಕವಿ ಶ್ರೀ। ಗೋವಿಂದ ಪೈಗಳ** "ಹೆಬ್ಬೆರಳು" ಎಂಬ ನಾಟಕ ತುಂಬಾ ಉದಾತ್ತ ಭಾವನೆ ಮತ್ತು ರಾಷ್ಟ್ರೋದ್ಧಾರಕ್ಕೆ ಸಂಬಂಧಿಸಿ ವಿಚಾರ ಪೂರ್ಣವಾದುದು. ಗೀತ ನಾಟಕವಿದು-ಸರಳ ರಗಳೆಯಲ್ಲಿ ಇದನ್ನು ರಚಿಸಿದ್ದಾರೆ. ದೀರ್ಘವಾದ ಹೊಸ ಛಂದವೂ ಅದರಲ್ಲಿರುವುದು. ಲೇಖಕರ ವಿಚಾರ ಭಾವನೆಗಳನ್ನು ಎಲ್ಲರೂ ತಿಳಿಯುವುದು ಸುಲಭಸಾಧ್ಯವಲ್ಲ. ಉತ್ತಮ ಸಾಹಿತಿಗೆ ಮಾತ್ರ ಅರಕತಕ್ಕವುಗಳಾಗಿವೆ. ಶ್ರೀ। ಪೈಗಳು ಜಪಾನಿನ ನೋ ನಾಟಕಗಳನ್ನು ಕನ್ನಡಿಗರ ಮುಂದಿರಿಸಿದ್ದಾರೆ. ಇವರಿಗೆ ಸಾಹಿತ್ಯ ಶೋಧಕರ ನೆಲೆಯಲ್ಲಿ ಉಚ್ಚ ಸ್ಥಾನವಿದೆ. ಅಂತೆಯೇ "ನವಕವಿತಾ ತಾತ"ರೆಂಬ ಬಿರುದನ್ನು ಜನರಿಂದ ಸಂಪಾದಿಸಿಕೊಂಡಂತೆ ನಾಟಕ ಬರೆಹಗಾರರಲ್ಲೂ ಆದರ್ಶವಾದಿತನದಿಂದ ಗೌರವಾಸ್ಪದರೆನಿಸಿದ್ದಾರೆ. ಶ್ರೀ। ಬ್ರಹ್ಮಪ್ಪನವರು "ಭರತೇಶನ ಬಾಳ್ಗಬ್ಬ" ಮತ್ತು "ಪಂಪ" ಎಂಬ ಎರಡು ನಾಟಕಗಳನ್ನು ಬರೆದು ಪ್ರಾಚೀನ ಕವಿಗಳಿಗೆ ಗೌರವವನ್ನು ಕೊಟ್ಟಿರುತ್ತಾರೆ. ಆ ಕಾರ್ಯ ಪ್ರಶಂಸನೀಯ. .

ಇನ್ನೂ ಹಲವಾರು ನಾಟಕಕಾರರು ಕನ್ನಡಿಗರ ಮುಂದಿರುತ್ತಾರೆ. ಕನ್ನಡಿಗರು ಹಿಂದೆ ತಮ್ಮ ಅಭಿಮಾನವನ್ನು ಎಲ್ಲಾ ಬಗೆಯಿಂದಲೂ ಉಳಿಸಿ ಕೊಂಡಿರುತ್ತಾರೆ. ಇಂದಿನ ನಾಟಕಗಾರರು ತಮ್ಮ ಸೇವೆಯನ್ನು ದೇಶಹಿತದ ದೃಷ್ಟಿಯಿಂದ ಸಾಧಿಸುತ್ತಿರುವುದು ಮುಖ್ಯ. ದೇಶಪ್ರೇಮ ಭಾವನೆ ಹೆಚ್ಚ ಬೇಕು. ಈ ಸಮಾರಾಧನಾ ವಸ್ತುವಿನಿಂದ ಜನರನ್ನು ತಿದ್ದಿ ಅಲೌಕಿಕ ಆನಂದವನ್ನುಣ್ಣುವಂತೆ ಮಾಡುವುದು ಅಗತ್ಯವಿದೆ. ಅಲೌಕಿಕ ಆನಂದ

ಪ್ರಾಪ್ತಿ ಸಾಹಿತ್ಯದ ಮೂಲಕ ಸಿದ್ಧಿಸುವುದಾದರೂ ನಾಟಕದ ಮೂಲ
ಸುಲಭ ಸಾಧ್ಯವಿದೆ. ಕನ್ನಡಿಗರು ತಮ್ಮ ಕಲಾ ವೈಭವವನ್ನು ಶಿಲ್ಪ
ಮೂಲಕ ದೆಸೆ ದೆಸೆಯಲ್ಲಿ ಮೆರೆಯಿಸಿದ್ದಾರೆ. ಅದೇ ವೈಭವ, ಅದಕ್ಕಿಂ
ಲೂ ಉನ್ನತವಾದ ಕೀರ್ತಿ ಸಂಪಾದನೆಯಾಗುವಂತೆ ನಾಟಕ ಕಲೆಯ
ಪೋಷಣೆಯನ್ನು ಮಾಡುವುದು ಕನ್ನಡಿಗರ ಕುಲಕ್ಕೆ ಸೇರಿದ ಕರ್ತವ್ಯ. ಈ
ಕರ್ತವ್ಯದ ಹೊಣೆಗಾರಿಕೆ ಎಲ್ಲರಲ್ಲೂ ಜಾಗೃತಿಗೊಂಡು ಕಾರ್ಯತಃ ದಿಕ
ದಿಕ್ಕುಗಳಲ್ಲೂ ಕಂಡುಬರುವಂತಾಗಲಿ! ಜಗತ್ತು ನಾಟಕ ಕಲೆಯ ಬೆಳ
ನಿಂದ ಒಳ್ಳೆಯ ಮಾರ್ಗದಲ್ಲಿ ನಡೆದು ಆನಂದವು ಸಿದ್ಧಿಸುವಂತಾಗಲಿ.





ಮೋಡರ್ನ್ ಪ್ರಿಂಟಿಂಗ್ ಪ್ರೆಸ್, ನೆಲ್ಲಿಕಾಯಿ ರೋಡ್, ಮಂಗಳೂರು.